ಒಂದಾಣೆ ಮಾಲೆ 206

# ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ ಜೀವನ ಚರಿತ್ರ ಮತ್ತು ಕೆಲವು ಭಜನಾಗೀತಗಳು



ಕೀರ್ತಿಶೇಷ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರು.

ಸಂಗ್ರಾಹಕರು: ಶ್ರೀ। ಬೆಳ್ಳಿ ಭುಜಂಗ ರಾವ್, ಬಿ. ಎ,
ನಿವೃತ್ತ ಪ್ರಾಧ್ಯಾಪಕ, ಮಂಗಳೂರು

1958 ಬೆಲೆ: ಆಣೆ ೧.

ಒಂದಾಣೆ ಮಾಲೆ, ಮಂಗಳೂರು.

# ಪ್ರತಿ ವಾರವೂ ಕೊಂಡುಕೊಳ್ಳಿರಿ!

"ಒಂದಾಣೆ ಮಾಲೆ"ಯು ಪುಸ್ತಕಗಳು, ಪ್ರತಿ ವಾರ ಪ್ರಕಟವಾಗುತ್ತಿವೆ. ಹೊಸ ಹೊಸ ವಿಷಯಗಳ ಮೇಲೆ ಪುಸ್ತಕಗಳು ಹೊರಡುತ್ತಿವೆ. 1954ನೇ ಸಪ್ಟಂಬರದಿಂದ 1958ನೇ ಒಕ್ಟೋಬರ ತಿಂಗಳ ಮೊದಲನೆಯ ವಾರದ ವರೆಗೆ 206 ಪುಸ್ತಕಗಳು ಪ್ರಕಟವಾಗಿದ್ದು, ಇನ್ನೂ ಪ್ರತಿ ವಾರ ಒಂದೊಂದು ಹೊಸ ಪುಸ್ತಕ ಹೊರಡುತ್ತಲೇ ಇದೆ.

206 ಆಣೆಗಳಿಗೆ 'ಒಂದಾಣೆ ಮಾಲೆ'ಯು, ಹೊದಿಕೆ ಕೂಡಿ, ಒಟ್ಟು 4118 ಪುಟಗಳನ್ನು ಕೊಟ್ಟಿರುತ್ತದೆ. ಇಷ್ಟು ಮೊಬಲಗಿಗೆ ಇಷ್ಟು ಪುಟಗಳನ್ನು ಬೇರೆ ಎಲ್ಲಿಯೂ ಯಾವ ಪ್ರಕಟಣೆಯೂ ಕೊಟ್ಟಿಲ್ಲ.

ವಿದ್ವಾಂಸರು ಮಾತ್ರ 'ಒಂದಾಣೆಮಾಲೆ'ಗೆ ಬರೆಯುತ್ತಾರೆ. 'ಅಶ್ಲೀಲ' ಎಂಬ ಅಂಶವೇ 'ಒಂದಾಣೆಮಾಲೆ'ಯ ಪ್ರಕಟಣೆಗಳಲ್ಲಿರುವುದಿಲ್ಲ.

'ಒಂದಾಣೆಮಾಲೆ' ಪುಸ್ತಕಗಳು ಚಿಕ್ಕ ವಿದ್ಯಾರ್ಥಿಗಳಿಂದ ವಯೋವೃದ್ಧರ ವರೆಗೆ, ಪ್ರತಿಯೊಬ್ಬನಿಗೂ ಅವಶ್ಯ ಇವೆ. ಇಷ್ಟು ಸುಲಭ ಬೆಲೆಯಲ್ಲಿ ಇಷ್ಟು ಉತ್ತಮ ಸಾಹಿತ್ಯವು, ಈ ಮೊದಲು ಎಲ್ಲಿಯೂ ಒದಗಿಸಲ್ಪಟ್ಟಿಲ್ಲ.

'ಒಂದಾಣೆ ಮಾಲೆ' ಪುಸ್ತಕಗಳನ್ನು ಟಪ್ಪಾಲು ದ್ವಾರಾ ತರಿಸಿಕೊಳ್ಳುವವರು ರೂ. 4—8—0ನ್ನು ಮನಿಯಾರ್ಡರ್ ಮೂಲಕ ಕಳಿಸತಕ್ಕದ್ದು. ಡಿಪಾಜಿಟ್ ಇಡುವವರು ಮಾತ್ರ ಏಜನ್ಸಿಗಾಗಿ ಬರೆದುಕೊಳ್ಳತಕ್ಕದ್ದು.

ವಾರಕ್ಕೆ ಕೇವಲ ಒಂದಾಣೆ ವ್ಯಯದಿಂದ ಒಂದು ಉತ್ಕೃಷ್ಟ—ಉಪಯುಕ್ತ ಪುಸ್ತಕವನ್ನು ಹೊಂದುವ ಈ ಯೋಜನೆಯ ಸದುಪಯೋಗ ಮಾಡಿಕೊಳ್ಳಿರಿ.

ಒಂದಾಣೆ ಮಾಲೆ, ಪ್ರಭಾತ ಆಫೀಸು, ರಥಬೀದಿ,
ಮಂಗಳೂರು-1.

ANNA PUBLICATIONS, CAR STREET, MANGALORE-1.

# ಹರಿದಾಸ
# ಶ್ರೀ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ
# ಸಂಕ್ಷಿಪ್ತ ಜೀವನಚರಿತ್ರೆ

ಪಾವಂಜೆ ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯನವರು ಕ್ರಿ.ಶ. 1854ನೇ ಆನಂದ ಸಂವತ್ಸರದ ಕುಂಭಮಾಸ ೧೮ ಸಲುವ ಬುಧವಾರದಂದು ಮೂಲ್ಕಿಯಲ್ಲಿ ಜನಿಸಿದರು. "ಮೂಲಿಕಾ ಪುರದೊಳಗಿಹ ವಿಶ್ವ । ಮಿತ್ರ ಗೋತ್ರಜ ಶಿವದ್ವಿಜ ಧನಂಜಯ ಪ್ರವರವೆತ್ತ ವೆಂಕಟಕೃಷ್ಣನ ॥ ಪುತ್ರ ಲಕ್ಷ್ಮೀನಾರಾಯಣನು........" ಎಂದು ಪದ್ಯವೊಂದರಲ್ಲಿ ತನ್ನ ಕುಲಗೋತ್ರ ಜನ್ಮಸ್ಥಳಗಳನ್ನು ತಿಳಿಸಿದ್ದಾರವರು.

ಬಾಲಕ ಲಕ್ಷ್ಮೀನಾರಾಯಣನಿಗೆ 8 ವರ್ಷ ಪ್ರಾಯವಾದಾಗ ಜನ್ಮದಾತರಾದ ವೆಂಕಟಕೃಷ್ಣಯ್ಯನು ಆ ಬಾಲಕನನ್ನು ತನ್ನ ಅಣ್ಣ ಸೀತಾರಾಮಯ್ಯನಿಗೆ ದತ್ತಕ್ಕೆ ಕೊಟ್ಟು ಅವರಿಂದ ಬ್ರಹ್ಮೋಪದೇಶ ಕೊಡಿಸಿದರು. ಆದರೆ, ಬಾಲಕನು "ಜಡಭರತ"ನಂತೆ ವರ್ತಿಸುತ್ತಿದ್ದುದರಿಂದ ಹಿರಿಯರೆಲ್ಲರಿಗೂ ಅವನಲ್ಲಿ ತಾತ್ಸಾರವುಂಟಾಯಿತು. ಅವನಿಗೆ 10ನೇ ವರ್ಷ ಪ್ರಾಯದಲ್ಲಿ ಪಿತೃವಿಯೋಗವಾಯಿತು. ಕುಟುಂಬದವರೂ ಸಂಬಂಧಿಕರೂ ಬಾಲಕನ ಸುಖಸಂಕಷ್ಟಗಳಲ್ಲಿ ನೆರವಾಗಲಿಲ್ಲ. ಆದ್ದರಿಂದ ಆ ಬಾಲಕನು ಬೈರಾಗಿಗಳ ಗುಂಪಿನಲ್ಲಿ ಸೇರಿಕೊಂಡು ಹೊರಟುಹೋದನು.

ಅಂದಿನಿಂದ ಸುಮಾರು 18 ವರ್ಷಗಳ ಕಾಲ ಲಕ್ಷ್ಮೀನಾರಾಯಣನ ವಿಷಯ ಯಾರಿಗೂ ಏನೂ ತಿಳಿದಿರಲಿಲ್ಲ. ಸುಮಾರು ಕ್ರಿ. ಶ. 1882ರಲ್ಲಿ ಕಾರ್ಕಳದ ಶ್ರೀ ವೆಂಕಟರಮಣ ದೇವಸ್ಥಾನದ ಬಳಿ ಒಬ್ಬನು ಬೈರಾಗಿಯಂತೆ ವೆಂಕಟರಮಣ, ಶ್ರೀನಿವಾಸ, ಲಕ್ಷ್ಮೀನಾರಾಯಣ ಮೊದಲಾದ ಹೆಸರುಗಳಲ್ಲಿ ದೇವರ ಹಾಡುಗಳನ್ನು ರಚಿಸಿ, ಹಾಡಿ, ಅಡ್ಡಾಡುವುದನ್ನು ಅಲ್ಲಿಯ ಜನರು ಕಂಡರು. ಸ್ಫೂರ್ತಿ ಬಂದಾಗ ನಿಂತಲ್ಲಿಯೆ ಕೀರ್ತನೆ ರಚಿಸಿ ಹಾಡುವುದು, ಕುಳಿತರೆ ಸಮಯದ ಅರಿವಿಲ್ಲದೆ ಕುಳಿತಿರುವುದು,

ತಿಂದರೆ ಹೊಟ್ಟೆಬಾಕನಂತೆ ಕೊಟ್ಟುದನ್ನೆಲ್ಲ ಕಬಳಿಸುವುದು, ಇಲ್ಲದಿದ್ದರೆ ಉಪವಾಸ ಬಿದ್ದಿರುವುದು—ಇಂತಹ ವ್ಯವಹಾರವುಳ್ಳವನಾದುದರಿಂದ ಕೆಲವರು ಅವನು ಅರೆಹುಚ್ಚನೆಂದೂ, ಇನ್ನೂ ಕೆಲವರು ಅವಧೂತನೆಂದೂ ತರ್ಕಿಸಿದರು.

ಒಂದೆರಡು ತಿಂಗಳುಗಳ ಮೇಲೆ ಒಂದು ದಿನ ಅಭಿಜಿನ್ಮುಹೂರ್ತದಲ್ಲಿ ಕಾರ್ಕಳದ ಶ್ರೀ ವೆಂಕಟರಮಣ ದೇವಸ್ಥಾನದ "ಕಾಳಭೈರವ"ನ ಆದೇಶದಂತೆ ದೇವಸ್ಥಾನದ ಮೊಕ್ತೇಸರರು ಆ ವ್ಯಕ್ತಿಯನ್ನು ದೇವರ ಸನ್ನಿಧಿಗೆ ಕರೆದೊಯ್ದಾಗ "ನೋಡಿದೆ ಮನದಣಿಯೆ । ಶ್ರೀನಿವಾಸನಾ । ನೋಡಿದೆ ಮನದಣಿಯೆ ॥" ಎಂಬ ಕೀರ್ತನೆಯನ್ನು ಆವೇಶಭರಿತರಾಗಿ ಹಾಡಿ, ನೆರೆದವರನ್ನೆಲ್ಲ ಆಶ್ಚರ್ಯಚಕಿತರನ್ನಾಗಿಸಿದರು.

ಅಂದಿನಿಂದ ಲಕ್ಷ್ಮೀನಾರಾಯಣ ಭಟ್ಟರಿಗೆ ದೇವಸ್ಥಾನದ ಮೊಕ್ತೇಸರರ ಮತ್ತು ಗೌಡಸಾರಸ್ವತ ಬ್ರಾಹ್ಮಣವೃಂದದ ನೆರವು ದೊರೆತುದರಿಂದ ಅವರು ಭಕ್ತಿದಾಯಕವಾದ ಕೀರ್ತನೆಗಳನ್ನು ರಚಿಸಿ ಭಜನೆಮಾಡುತ್ತಾ, ಒಮ್ಮೊಮ್ಮೆ ಹರಿಕಥೆ ಮಾಡುತ್ತಾ ಏಳೆಂಟು ವರ್ಷಗಳ ಕಾಲ, ಕಾರ್ಕಳ, ಮೂಲ್ಕಿ, ಮಂಗಳೂರು ತಾಲೂಕುಗಳಲ್ಲಿ ಸಂಚರಿಸುತ್ತಿದ್ದರು.

ಇದೇ ಸಂದರ್ಭದಲ್ಲಿ ಅವರ ಸಂಬಂಧಿಕರು ಅವರನ್ನು ತಾಯಿಯಿದ್ದಲ್ಲಿಗೆ, ಮೂಲ್ಕಿಗೆ, ಕರೆದುಕೊಂಡು ಹೋಗಿ, ಅವರು ಸಂಸಾರದಲ್ಲಿ ಪ್ರವೃತ್ತರಾಗುವಂತೆ ಮದುವೆಮಾಡಿಸಿದರು. ವಿವಾಹವಾಗಿ ನಾಲ್ಕನೆಯ ವರ್ಷದಲ್ಲಿ ಆ ಹೆಂಡತಿ ಕಾಲವಶವಾದುದರಿಂದ ಎರಡನೆಯ ಮದುವೆಯೂ ಆಯಿತು. ಆದರೆ, ಅವರನ್ನು ಸಂಸಾರ ಬಂಧನದಲ್ಲಿ ಸಿಲುಕಿಸಿ ಲೌಕಿಕ ರೀತಿಯಲ್ಲಿ ಸರಿದಾರಿಗೆ ತರಲು ಯಾರಿಂದಲೂ ಸಾಧ್ಯವಾಗಲಿಲ್ಲ.

ಯಾರಿಗೂ ತಿಳಿಸದೆ ಪುನಃ ಒಮ್ಮೆ ಅವರು ಸುಮಾರು 8 ವರ್ಷಗಳ ಕಾಲ ದೇಶಪರ್ಯಟನ ಮಾಡಿದರಂತೆ. ಆನಂತರವೂ ಅವರು ತಿಂಗಳುಗಟ್ಟಲೆ ಬೈರಾಗಿಗಳ ತಂಡದೊಡನೆ ಅಲೆಯುವುದು, ಒಮ್ಮೊಮ್ಮೆ ಕಾಶೀ ಮಠಾಧೀಶರ ಪರಿವಾರದೊಂದಿಗೆ ಸಂಚರಿಸುವುದು, ಮನೆಗೆ ಬಂದು ಕೆಲವು ದಿನಗಳ ವರೆಗೆ ಮಾತ್ರ ಇದ್ದು, ಯಾರಿಗೂ ಹೇಳದೆ ಹೊರಟುಹೋಗಿಬಿಡುವುದು—ಹೀಗೆ ವರ್ತಿಸುತ್ತ, ಅವರು ಸ್ವಜನರ ಆದರಾನುರಾಗಗಳನ್ನು ಸಂಪೂರ್ಣವಾಗಿ ಕಳೆದುಕೊಂಡರು.

ಶ್ರೀ ಕಾಶೀಮಠಾಧಿಶರಾಗಿದ್ದ ಶ್ರೀ ಭುವನೇಂದ್ರತೀರ್ಥ ಸ್ವಾಮಿಗ ಳಲ್ಲಿ ಅವರು ಕಾವ್ಯಾಭ್ಯಾಸ ಮಾಡಿ ದ್ವೈತ ತತ್ತ್ವೋಪದೇಶವನ್ನು ಪಡೆದಂತೆ ಅವರ ಕೀರ್ತನೆಗಳಿಂದ ಸ್ಪಷ್ಟವಾಗುತ್ತವೆ.

"ಕಂಡೂ ಕೃತಾರ್ಥನಾದೆ । ಭುವನೇಂದ್ರರಂಘ್ರಿಯು । ಕಂಡೂ ಕೃತಾರ್ಥನಾದೆ ॥............ । ಆಶೆಯೊಂದಿತ್ತೆನಗೆ । ಕಾವ್ಯವೋದ್ಯ । ಭ್ಯಾಸಗೆಯ್ಯುವ ಬಗೆಗೆ ॥ ಸನ್ನಿಧಾನದಿ ಪೋಷಿಸಿ ಎನ್ನ ಹೀಗೆ ॥ ರಕ್ಷಿಸಿ, ಶಿಕ್ಷಿಸಿ, ಕಡೆಗೆ । ಹರಸಿದ ಧನ್ಯನು ನಾನು ॥..........."

ಸಂಚಾರಕಾಲದಲ್ಲಿ ಸಂಘದೋಷದಿಂದ ತಗಲಿದ್ದ ದುರ್ವ್ಯಸನಗಳಿಗೆ ಅವರು ಬಲಿಬಿದ್ದು ಪರಿತಪಿಸುತ್ತಿದ್ದರಿಂದೂ, ಅನಾರೋಗ್ಯ, ಬಡತನ, ಅಪವಾದ, ಅನಾದರಗಳಿಗೆ ಒಳಗಾಗಿದ್ದರಿಂದೂ "ತಪ್ಪ ಪಾಲಿಸು............ ಕೈಹಿಡಿದು ಉದ್ಧರಿಸು............" ಎಂಬಿತ್ಯಾದಿ ದೇವರಿಗೆ ಮೊರೆಯಿಡುವ ನೂರಾರು ಕೀರ್ತನೆಗಳಿಂದ ವಿಶದವಾಗುತ್ತದೆ.

"ಹಣವಿಲ್ಲ ಕೈಯೊಳಗೆ । ಸ । ದ್ಗುಣವಿಲ್ಲ ಮನದೊಳಗೆ । ಜನಿತಾರಭ್ಯದಿ ತನುಸುಖವಿಲ್ಲ ॥ ಗೋಚರವಿಲ್ಲಲೊ ರಂಗ । ಎನ್ನ ಪ್ರಾಚೀನದ ಪರಿಭಂಗ ॥ ನಾಚಿಕೆ ತೊರೆದಾ ಯಾಚಕತನವ । ನ್ನಾಚರಿಸುವ ಕಾಲೋಚಿತ ಬಂದುದು॥ಬಂಗಾರ ಭಂಡಾರ ಬಯಸೇನು ವಿಠಲಾ ॥ ಮಂಗಲಕೊಡು ಎನ್ನ ಬುದ್ಧಿಗೆ ವಿಠಲಾ॥ಎನಗೆ ದಾರಿದ್ರ್ಯವಕೊಟ್ಟ ಕಾರಣದಿಂದ । ಹಣವೆಲ್ಲ ಗುಣ ನುಂಗಿತು ॥ ಪಾದಕೆ ಗೊತ್ತು॥ ಹೋದರೆಲ್ಲ್ಯಾದರು । ಅಪ। ವಾದವ। ಪೇಳ್ವರು ಜನರು ॥ ನಾನಾನಂತಪರಾಧಿ । ಎನಗೇನಿಲ್ಲವು ದೃಢ ಬುದ್ಧಿ ॥.... ಹಿಂದಿಲ್ಲವು । ಮುಂದಿಲ್ಲವು ಲೋಕದಿ ನಿಂದ್ಯಾಪಾತ್ರತಾನಾದೆ ॥............" ಎಂಬೆಲ್ಲ ಸೊಲ್ಲುಗಳಲ್ಲಿ ಅವರ ಜೀವನಕಥೆ ವ್ಯಕ್ತವಾಗುತ್ತದೆ.

ಸುಮಾರು ಕ್ರಿ. ಶ. 1905ರಲ್ಲಿ ಕಾರ್ಕಳ ಶ್ರೀ ವೆಂಕಟರಮಣ ದೇವರ ಸನ್ನಿಧಿಯಲ್ಲಿ "ತಪ್ಪುಗಳೆಲ್ಲವ । ಒಪ್ಪುಗೊಳ್ಳೆ ಶ್ರೀ । ಚಪ್ಪರ ಶ್ರೀನಿವಾಸ" ಎಂಬ ಕೀರ್ತನೆಯನ್ನು ಹಾಡಿ ಅಂಜಲೀಬದ್ಧರಾಗಿ ನಿಂತಿದ್ದಂತೆ ಅವರ ಕೈಗೆ ಮುಡಿಪ್ರಸಾದವು ಬಿತ್ತೆಂದೂ, ಅಂದಿನಿಂದ ಸುಮಾರು 8 ತಿಂಗಳುಗಳ ಕಾಲ ಕಾರ್ಕಳದಲ್ಲಿಯೇ ನೆಲಸಿ ನೂರಾರು ಸ್ತೋತ್ರಗಳನ್ನೂ ಗೀತಗಳನ್ನೂ ರಚಿಸಿ, ಹಾಡಿ, ಶ್ರೀ ವೆಂಕಟರಮಣನ ಮಹಿಮೆಯನ್ನು ಕೊಂಡಾಡಿದರೆಂದೂ, ಅಲ್ಲಿ ನಡೆಯುವ ಪೂಜೋತ್ಸವಾದಿಗಳ ವರ್ಣನೆ

ಗಳನ್ನು ಭಜನೆಯ ಹಾಡುಗಳಲ್ಲಿ ಶಾಶ್ವತಗೊಳಿಸಿದರೆಂದೂ ಪ್ರತೀತಿಯಿದೆ. ಅನಂತರ ಒಂದು ದಿನ ಉಷಃಕಾಲ ಪೂಜಾವಸರದಲ್ಲಿ "ಪೋಗಿ ಬರುವೆನು ಎನ್ನ ಮನೆಗೆ । ಜಗದೀಶ । ಭಾಗವತಪ್ರಿಯ । ಭಾಗೀರಥಿ ಜನಕ ॥" ಎಂಬ ಕೀರ್ತನೆಯನ್ನು ಹಾಡಿ ಪ್ರಸಾದ ಪಡೆದು ಊರಿಗೆ ಬಂದರೆಂದೂ, ಅಂದಿನಿಂದ ಅವರ ಜೀವನವು ಒಂದು ವ್ಯವಸ್ಥಿತ ಹಂತಕ್ಕೆ ಬಂತೆಂದೂ ಹೇಳುತ್ತಾರೆ. ಹಾಗೆ ಬಂದವರೇ ಪಾವಂಜೆಯಲ್ಲಿ ಒಂದು ಮನೆಮಾಡಿ ಕೊಂಡು ಅಲ್ಲಿ ವಾಸಿಸಿದರು.

ಸುಮಾರು ಕ್ರಿ. ಶ. 1906ರಿಂದ 20 ವರ್ಷಗಳ ಕಾಲ ಮಂಗಳೂರು, ಉಡ್ಪಿ, ಕಾರ್ಕಳ ತಾಲೂಕುಗಳಲ್ಲಿ ಹರಿಕಥಾ ಕಾಲಕ್ಷೇಪಗಳನ್ನು ಮಾಡಿ ಜನಸಾಮಾನ್ಯರ ಆದರ–ಗೌರವಗಳನ್ನು ಪಡೆದು ಅವರು ಕೀರ್ತಿಭಾಗಿಗ ಳಾದರು. ಅವರ ಹರಿಕಥೆಗಳು ಭಕ್ತಿಪ್ರಧಾನವಾದವುಗಳು. ಪ್ರತಿಯೊಂದು ಕಥೆಗೂ ಅದಕ್ಕನುಗುಣವಾದ ಪೀಠಿಕೆಯೂ ಯಥೋಚಿತವಾದ ತತ್ತ್ವ ಬೋಧಕವಾದ ಹಾಡೂ ಇತ್ತು. ಭಾವರಸೋಪಯುಕ್ತವಾದ ಶೈಲಿಯಲ್ಲಿ ರಾಗಾಲಾಪದೊಂದಿಗೆ, ತಾಳಲಯಬದ್ಧವಾದ ಹಾಡುಗಳನ್ನು ಸನ್ನಿವೇಶ ಕ್ಕನುಗುಣವಾಗಿ ರಚಿಸಿಕೊಂಡು ಆಯಾಪಾತ್ರಗಳ ಮಾತುಗಳಂತೆ ಹಾಡುವ ಅಪೂರ್ವ ಶಕ್ತಿ ಅವರಲ್ಲಿತ್ತು. ಅವನ್ನು ಹಾಡುವಾಗ ಆಯಾ ಪಾತ್ರಗಳಂತೆ ನಟಿಸುತ್ತಾ ತಲ್ಲೀನರಾಗುವ ಸ್ವಭಾವವಿತ್ತು. ಇಡೀ ಸಭೆಯೇ ಭಾವ ಸಮಾಧಿಯಲ್ಲಿ ಮುಳುಗುವಂತೆ ಮಾಡುವ ದಿವ್ಯಶಕ್ತಿ ಅವರ ಕಥನಕ್ರಮ ದಲ್ಲಿತ್ತು. ಈ ತಲ್ಲೀನತೆಗೆ ಭಂಗ ಬರುವಂತೆ ಸಭಿಕರಲ್ಲಿ ಯಾರಾದರೂ ವರ್ತಿಸಿದರೆ ಅವರನ್ನು ತಾನು ನಟಿಸುವ ಪಾತ್ರದ ಮಾತುಗಳೋ ಎಂಬಂತೆ ಹಾಡಿನಲ್ಲಿಯೇ ಹಳಿದು ಭಂಗಿಸಿ ಎಚ್ಚರಿಸುವ ಕ್ರಮವೂ, ಭಾವಾವೇಶವು ಇಳಿದು ಹೋಗುವ ಸನ್ನಿವೇಶವೊದಗಿದರೆ ಕೂಡಲೆ ಕಥೆಯನ್ನು ನಿಲ್ಲಿಸುವ ಕ್ರಮವೂ ಅವರಲ್ಲಿತ್ತು.

ಕಥೆ ನಿಲ್ಲಿಸಿದ ಸಂದರ್ಭವೊಂದು ಹೀಗಿದೆ: "ವನವಾಸದಲ್ಲಿಯೂ ಪಾಂಡವರನ್ನು ಅನುಸರಿಸಿದ ಪರಿವಾರದವರಿಗೆ ಊಟೋಪಚಾರಗಳನ್ನು ಮಾಡಿಸುವ ಪ್ರಶ್ನೆ ಧರ್ಮರಾಯನನ್ನು ಇದಿರಿಸಿತು. ಆವನು ಚಿಂತಿಸು ತ್ತಿರುವಾಗ ನಾರದರು ಬಂದು "ಅಕ್ಷಯ ಪಾತ್ರೆ" ಸಿದ್ಧಿಸಿಕೊಳ್ಳಬೇಕೆಂದು ಬೋಧಿಸುತ್ತಿದ್ದರು. ಆಗ ಸಭೆಗೆ ಆಗಮಿಸಿದ ಇಬ್ಬರು ಶ್ರೀಮಂತರು ತಮ್ಮ

ವಹಿವಾಟುಗಳ ವಿಷಯು ಗಟ್ಟಿಯಾಗಿ ಮಾತನಾಡುತ್ತಿದ್ದರು. "ನಿಮ್ಮ ಊಟೋಪಚಾರದ ವ್ಯವಸ್ಥೆ ಬೇಗನೆ ಆಗುತ್ತದೆ. ಅಷ್ಟರ ವರೆಗೆ ನಾರಾಯಣ, ನಾರಾಯಣ ಎಂದು ಸುಮ್ಮನಿರಿ" ಎಂದು ಬೋಧಿಸಿದರೂ ಅವರು ತಮ್ಮ ಚರ್ಚೆಯನ್ನೆ ಮುಂದುವರಿಸಿದರು. ಲಕ್ಷ್ಮೀನಾರಾಯಣನ ಭಜನೆಯನ್ನು ನಾರದರು ಮಾಡಿದರೂ ಸಭೆಯು ಶಾಂತವಾಗಲಿಲ್ಲ. ಆಗ "ಇಂತಹ ಜನರಿಗೆ। ಎಂಥಾದೊ ಹರಿಕಥೆ। ಕುಂತಿ ಮಕ್ಕಳಿಗಾಯಿತು । ಕಾಂತಾರ ವಾಸ ॥ ಲಕ್ಷ್ಮೀನಾರಾಯಣನ । ಲಕ್ಷಣಾಂಕಿತರನ್ನು । ಲಕ್ಷಕ್ಕೆ ತಾರದ ಕುಕ್ಷಿಂಭರರು । ಇಂತಹ ಜನರು ॥ ಇಂತಹ ಜನರಿಗೆ.... । ಎಂದು ಹಾಡಿ, ಹಾಡಿ, ಕಥೆ ನಿಲ್ಲಿಸಿ ಕುಳಿತುಬಿಟ್ಟರು. ಇಂತಹ ವ್ಯವಹಾರಗಳಿಂದ ಅವರು ಶ್ರೀಮಂತರ, ಕಥೆ ಮಾಡಿಸುವವರ ಅನಾದರಕ್ಕೆ ಪಾತ್ರವಾದುದೂ ಇದೆ.

ಸುಮಾರು ಕ್ರಿ. ಶ. 1914ರಲ್ಲಿ ಪಾವಂಜೆಯ ಕೀ. ಶೇ. ವಾಸು ಭಟ್ಟರು ಒಂದು ದೇವಾಲಯವನ್ನು ಕಟ್ಟಿಸಬೇಕೆಂದು ಕಾರ್ಯಾರಂಭ ಮಾಡಿದ ಮೇಲೆ ಹರಿದಾಸರು ಹೆಚ್ಚಾಗಿ ಪಾವಂಜೆಯಲ್ಲಿಯೇ ವಾಸಿಸುತ್ತಿದ್ದರು. ಅಲ್ಲಿ ಹಲವರು ಸ್ವಜಾತಿ ಬಾಂಧವರ ಸಂಸರ್ಗದಿಂದ ನಿಯಮಿತ ಜೀವನಕ್ರಮವು ಅವರಲ್ಲಿ ನೆಲೆಗೊಂಡಿತು. ಅಲ್ಲದೆ ಅಲ್ಲಿ 1920ನೇ ಇಸವಿಯಲ್ಲಿ ಪ್ರತಿಷ್ಠಿಸಲ್ಪಟ್ಟ "ಶ್ರೀ ಜ್ಞಾನಶಕ್ತಿ ಸುಬ್ರಹ್ಮಣ್ಯ ಸ್ವಾಮಿ"ಯ ನೂರಾರು ಕೀರ್ತನೆಗಳನ್ನು ಸಂದರ್ಭೋಚಿತವಾಗಿ ರಚಿಸಿ, ಹಾಡಿ, ಭಜನಾ ಮಂಡಲಿಗಳಲ್ಲಿ ಹಾಡಿಸಿ, ಸುಖಿಸುತ್ತಿದ್ದರು.

ಕ್ರಿ ಶ. 1922ನೇ ಇಸವಿ ಫೆಬ್ರವರಿ 1ನೇ ತಾರೀಕಿನಂದು ತನ್ನ ಸಕಲ ಸ್ಥಿರ ಚರಸೊತ್ತುಗಳು ತನ್ನ ಮರಣಾನಂತರ ಶ್ರೀ ದೇವರ ಭಂಡಾರದ ಸ್ವಾಧೀನವಾಗುವಂತೆಯೂ ತನ್ನ ಇಬ್ಬರು ಹೆಣ್ಣುಮಕ್ಕಳಿಗೆ ಸಂತತಿ ಪಾರಂಪರ್ಯವಾಗಿ ಶ್ರೀ ದೇವರ ಭಂಡಾರದಿಂದ ಅಶನಾರ್ಥ ಸಲ್ಲುವಂತೆಯೂ ವ್ಯವಸ್ಥೆ ಮಾಡಿ, ತನ್ನ ಮರಣಶಾಸನವನ್ನು ರಿಜಿಸ್ಟ್ರಿ ಮಾಡಿಸಿದರು. ಜೀವಮಾನಕಾಲದಲ್ಲಿ ಹೆಚ್ಚಾಗಿ "ಕಡು ಲೋಭಿ, ಅತಿ ಜಿಪುಣ" ಎಂಬ ಅವಹೇಳನಕ್ಕೆ ಪಾತ್ರರಾಗಿದ್ದ ಹರಿದಾಸರು ತನ್ನ ಸಕಲವನ್ನೂ ದೇವತಾರ್ಪಣ ಮಾಡಿ ಕೀರ್ತಿಭಾಗಿಗಳಾದರು.

ಹರಿದಾಸರು, ಶುದ್ಧ ದ್ವೈತಿಯೂ ಮಾಧ್ವಸಂಪ್ರದಾಯವಾದಿಯೂ ಎಂದು ಅವರ ಕೀರ್ತನೆಗಳಿಂದ ವ್ಯಕ್ತವಾಗುತ್ತದೆ. ಅವರ ಕೀರ್ತನೆಗಳಲ್ಲಿ

'ಲಕ್ಷ್ಮೀನಾರಾಯಣ' ಎಂಬ ಮುದ್ರಿಕೆಯಿದೆ. ಇತರ "ದೇವರುಗಳೆ"ಲ್ಲ ಅವನ ಶರಣರು, ಕಿಂಕರರು, ಸೇವಕರು, ಹೆಚ್ಚಾದರೆ ಅವನ ಮಿತ್ರರು— ಹೇಗೂ ಎಲ್ಲರೂ ಅವನಲ್ಲಿ ಅಂತರ್ಗತರು ತನ್ನ ನಿತ್ಯಪೂಜಾ ವಿಧಿಗಳಲ್ಲಿಯೂ ಈ ಎಲ್ಲಾ ಅಂತರಗಳನ್ನು ಇಟ್ಟೇ ಪೂಜೆಮಾಡುವ ಪದ್ಧತಿಯುವರದು. ಪೂಜೆಗೆ ಮಂತ್ರಗಳನ್ನು ಹೇಳುವ ಬದಲು ಪದ್ಯಗಳನ್ನು ಹಾಡುವ ಕ್ರಮವೂ ಅವರಲ್ಲಿತ್ತು.

ಕ್ರಿ ಶ. 1926ನೇ ಇಸವಿ ಆದಿಯಲ್ಲಿ ಪಾಪಂಜೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ "ಕಿರಿಷಷ್ಠಿ" ಉತ್ಸವವನ್ನು ಮುಗಿಸಿಕೊಂಡು ಹರಿದಾಸರು ಹೊೖಗೆಗುಡ್ಡೆ ಹರಿನಾರಾಯಣ ಭಟ್ಟರಲ್ಲಿಗೆ ಅತಿಥಿಯಾಗಿ ಹೋಗಿ ಆ ದಂಪತಿಗಳ ಆದರೋಪಚಾರಗಳನ್ನು ಸ್ವೀಕರಿಸಿದರು. ಅಲ್ಲಿಯೇ ನೆಪಮಾತ್ರದ ಅನಾರೋಗ್ಯದಿಂದ ನಾಲ್ಕೈದು ದಿನ ಚಾಪೆಹಿಡಿದಿದ್ದರು. ಅದೇ ಮಕರ ಸಂಕ್ರಮಣದಂದು ಪ್ರಾತಃಕಾಲ ಅವರ ಪ್ರಾಣಜ್ಯೋತಿ ನಶ್ವರವಾದ ಜಡದೇಹವನ್ನು ತ್ಯಜಿಸಿ ದಿವ್ಯಜ್ಯೋತಿಯಲ್ಲಿ ಲೀನವಾಯಿತು. ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯನವರು ಕೀರ್ತಿಶೇಷರಾದರು.

ಪ್ರತಿಭಾನ್ವಿತ ಹರಿದಾಸ ಲಕ್ಷ್ಮೀನಾರ್ಣಪ್ಪಯ್ಯನವರ ಕೆಲವು ಹಾಡುಗಳನ್ನು ಸಂಗ್ರಹಿಸಿ ಪಂಡಿತವರ್ಯ ಶ್ರೀ। ಕೆ ವೆಂಕಟರಾಯಾಚಾರ್ಯರು 'ಒಂದಾಣೆಮಾಲೆ'ಯ 175ನೇ ಕುಸುಮವಾಗಿ ಪ್ರಕಟಿಸುವಂತೆ ಸಂಪಾದಕರಿಗೆ ನೆರವಾಗಿದ್ದಾರೆ. ಹರಿದಾಸರ ಇನ್ನೂ ಕೆಲವು ಹಾಡುಗಳನ್ನೂ ಸಂಕ್ಷಿಪ್ತ ಜೀವನ ಚರಿತ್ರೆಯನ್ನೂ ಪ್ರಕಟಿಸಿ ಜನರಲ್ಲಿ ಭಕ್ತಿ ವೈರಾಗ್ಯಗಳು ಬೆಳೆಯುವಂತೆ ಮಾಡಬೇಕೆಂಬ ಸಂಪಾದಕರ ಸದುದ್ದೇಶವು ಪ್ರಶಂಸನೀಯವು. ಅವರ ಈ ಸ್ತುತ್ಯಕಾರ್ಯಕ್ಕೆ ಜನಾದರವೂ ಪ್ರೋತ್ಸಾಹವೂ ದೊರೆಯುವಂತೆ ಲಕ್ಷ್ಮೀನಾರಾಯಣನು ಅನುಗ್ರಹಿಸಲಿ.

---

ಶ್ರೀ। ಲಕ್ಷ್ಮೀನಾರ್ಣಪ್ಪಯ್ಯನವರಿಂದ ರಚಿಸಲ್ಪಟ್ಟ ಕೀರ್ತನೆಗಳ ಇನ್ನೊಂದು ಪುಸ್ತಕವು ಈ ಮಾಲೆಯಲ್ಲಿ ಸದ್ಯದಲ್ಲೇ ಪ್ರಕಟವಾಗಲಿದೆ.—ಸಂ।

# ಹರಿದಾಸ ಪಾವಂಜೆ ಲಕ್ಷ್ಮೀನಾರ್ಣಪ್ಪಯ್ಯನವರ ಕೆಲವು ಭಜನಾಗೀತಗಳು

೧ ॥ ರಾಗ: ಯಮುನ ಕಲ್ಯಾಣ. ಅಷ್ಟತಾಳ ॥

ಸಿದ್ಧಿದಾಯಕ ವಿಘ್ನರಾಜ । ಸುಪ್ರ । ಸಿದ್ಧ ಮಹಿಮ ಯೋಗಿ । ಹೃದ್ಯ್ರವಿ ತೇಜ ॥ ಸಿದ್ಧಿ ॥ ಪಲ್ಲ ॥ ಬಾದರಾಯಣ ಸುಪ್ರ । ಸಾದ ಸತ್ಪಾತ್ರ ॥ ಶ್ರೀಧರೋಪಾಸನ । ಶೀಲ ಸುಪವಿತ್ರ ॥ ೧ ॥ ಭೋಗೀಂದ್ರ ಭೂಷಣ । ನಾಗೇಂದ್ರವದನ ॥ ಭಾಗವತರ ಭಾಗ್ಯ । ಸದನ ಜಿತಮದನ ॥ ೨ ॥ ಸರ್ವಾರ್ಥಕಾಧವ । ಗುರುವರ್ಯ ಕ್ಷಮಿಸಯ್ಯ ॥ ಸರ್ವೋತ್ತಮ ಲಕ್ಷ್ಮೀ । ನಾರಾಯಣ ಪ್ರೀಯ ॥ ೩ ॥

೨ ॥ ರಾಗ: ರೂಪಕ ತಾಳ ॥

ನಮೋ ನಮಸ್ತೆ । ಉಮಾತನಯ । ಕುಮಾರಾಗ್ರಜ ನಮೋ ॥ ಪಲ್ಲ॥ ಅಮೋಘ ಶಮ । ದಮಾದಿ ಗುಣ । ಸಮೂಹಗತ । ವಿಮೋಹ ಸದಾ ॥ ಅನುಪಲ್ಲ ॥ ಭಾರತವ । ಮಹಾಭಾರತವ । ಬಾದರಾಯಣನು ! ಪೇಳ ದಂತೆ ಬರದೆ ॥ ಭಾರತವ ॥ ಮಾರಜ ಭ್ರಮೆಯ । ದೂರಗೈದ ಸುವಿ ! ಚಾರ ಧೀರ ಸುರ । ವಾರವಿನುತ ಪಾದ ॥ ೧ ॥ ವಂದಿಸುವೆ । ನಾ ವಂದಿಸುವೆ ॥ ವೃಂದಾರ ಕೇಂದ್ರ ಯೋ । ಗೀಂದ್ರ ತವಚರಣಕೆ ॥ ವಂದಿಸುವೆ ॥ ವಂದಾರು ಮಂದಾರ । ಚಂದನ ಚರ್ಚಿತ । ಚಂದ್ರಚೂಡಮನೋನಂದ ಮೂರುತಿಯೆ ॥ ೨ ॥ ಸುಕ್ಷೇಮದ । ಸುಜನ । ಪಕ್ಷಪಾವನ ಮುಮುಕ್ಷು ಜನಪ್ರಿಯ । ಸುಕ್ಷೇಮದ ॥ ಲಕ್ಷ್ಮೀನಾರಾಯಣ । ಲಕ್ಷ್ಮಿಶಾತ್ಮನೆ ವಿ । ಪಕ್ಷರಕ್ಷೋಗಣ । ಶಿಕ್ಷ ಸೂಕ್ಷ್ಮಮತೀ ॥ ೩ ॥

೩ ॥ ರಾಗ: ತೋಡಿ. ರೂಪಕ ತಾಳ ॥

ಅಗ್ರಪೂಜಾ । ವಿಘ್ನರಾಜ । ಅಗ್ನಿಜಾಗ್ರಜ ಮಹೋಜ ॥ ಪಲ್ಲ ॥ ಲಗ್ನಮಾಗಲಿ ಹರಿಪದಾಬ್ಜ । ನಿಗ್ರಹೀತ ಕಾಮ ಬೀಜ ॥ ಅ. ಪ. ॥ ಭಾನುತೇಜ । ಭಕ್ತಿಭಾಜ । ಧ್ಯಾನಗಮ್ಯ ಮುನಿಸಮಾಜ ॥ ದೀನಕಾಮದ

ಕಲ್ಪಭೂಜ । ಗಾನಲೋಲ ಭ । ವಾನಿಯಾತ್ಮಜ ॥ ೧ ॥ ಚತುರಭುಜ ಪ । ಚ್ಚರಿತ ವಿರಜ । ಯತಿವರೇಣ್ಯ ಗಣವಿರಾಜ ॥ ಮತಿಮತಾಂ ವರ । ನತ ಬಿಡೌಜ । ಕೃತುಭುಜಾರ್ಚಿ । ತಾಂಘ್ರಿ ಪಂಕಜ ॥ ೨ ॥ ರುಕುಮಿ ಣೀಜ । ರುದ್ರ ಗಣವ್ರಜ । ಭಕುತವತ್ಸಲ ಮನೋಜ ॥ ಮುಖಮತಂ ಗಜ । ಮೂಷಿಕಧ್ವಜ । ಲಕುಮಿನಾರಾಯಣ ಗುಣಜ್ಞ ॥ ೩ ॥

೪ ॥ ರಾಗ: "ವರದೇಂದ್ರ ಸದ್ಗುರುವೇ" ಎಂಬಂತೆ. ಆದಿತಾಳ ॥

ಅಂಬಾ ಬ್ರಹ್ಮಾಣಿ । ನಿನ್ನ । ನಂಬಿದೆನು ವಾಣಿ ॥ ವರ । ನಾಂಬುಜ ದಿನೀ । ನಿಂಬುಗೊಂಡು ಪ । ರಾಂಬರಿಸು ಜನನೀ ॥ ಜಗದಂಬಾ ॥ ಪಲ್ಲ ॥ ಶೋಕ-ಭಯದೂರೆ । ಭಕ್ತಾ । ನೀಕ ಮಂದಾರೆ ॥ ಜಗ । ದೇಕ ನಾಥೆ ಪಿ । ನಾಕಿ ಮುಖ್ಯ ದಿ । ವೌಕಸಾಧಾರೆ ॥ ೧ ॥ ಶಾರದೇ ವರದೇ । ಶ್ರುತಿ । ಸಾರ ಸುಗುಣನಿಧೆ ॥ ಮಮ । ಕಾರ ಮೋಹವಿಕಾರಭಿದೆ ಜಂ । ಭಾರಿ ವಿನುತಪದೆ ॥ ೨ ॥ ಮಂಗಲಪ್ರದೆ ಸೌ । ರಂಗ ನೇತ್ರೆ ಬುಧೆ ॥ ಕನಕಾಂಗಿ ಸದಯಾ । ಪಾಂಗಿ ಹಂಸತು । ರಂಗಿ ಸರ್ವವಿಧೆ ॥ ೩ ॥ ಪುಸ್ತಕಪಾಣಿ । ನ—ಮಸ್ತೆ ಕಲ್ಯಾಣಿ ॥ ಪಂ । ವಸ್ತುವಿನ ಗುಣ ವಿಸ್ತರೀತ ಪ್ರ । ಶಸ್ತ ಫಣಿವೇಣಿ ॥ ೪ ॥ ಪ್ರಿಯೆ ಶ್ರೀ ಲಕ್ಷ್ಮೀ । ನಾರಾಯಣೀ ಪ್ರೇಮಿ ॥ ವಿಧಿ । ಜಾಯೆ ಚತುರೋ । ಪಾಯೆ ಪಾವನ । ಕಾಯೆ ನಿಷ್ಕಾಮಿ ॥ ೫ ॥

೫ ॥ ರಾಗ: ಆದಿತಾಳ ॥

ಸರಸ್ವತೀ ದೇಹಿ ಸನ್ಮತಿ ॥ ಪಲ್ಲ ॥ ವಿಧಿಸತೀ— ಸುವ್ರತೀ ಶ್ರೀಮತಿ ಭಾರತಿ । ಸರಸ್ವತೀ ॥ ಅ. ಪ. ॥ ನಿಗಮವೇದ್ಯನನು ನಿತ್ಯ ಪೊಗಳುತೀ । ಜಗದೀಶ್ವರಿ ಜಲಜಾಯತ ನೇತ್ರಿ ॥ ಭಗವತಿ—ಪವಿತ್ರಿ—ಸಾವಿತ್ರಿ—ಗಾಯತ್ರಿ ॥ ೧ ॥ ಶರ್ವೇಂದ್ರ ಪೂರ್ವ ಗಿರ್ವಾಣತತಿ । ಸರ್ವದಾಚರಿಸು ವದು ತವಸ್ತುತಿ ॥ ಸದ್ಭಕ್ತಿ—ವಿರಕ್ತಿ— ಶ್ರಿಶಕ್ತಿ—ದೇವಕಿ ॥ ೨ ॥ ಲಕ್ಷ್ಮೀ ನಾರಾಯಣನ ಮೂರುತಿ । ಲಕ್ಷಿಸಿ । ಮನದೊಳಾನಂದದೊಳಿರುತೇ ॥ ಗುಣವತಿ — ಸುಗತಿ — ಸದ್ಧ್ರತಿ— ವಿಧಾತ್ರಿ ॥ ೩ ॥

೬ ‖ ರಾಗ: ತೋಡಿ. ಅಷ್ಟತಾಳ ‖

ಬಾರಮ್ಮ ಸರಸ್ವತಿ । ಬಾದೃಹಿಣ ಯುವತಿ । ಬಾ ನಿರ್ಮಲ ಮತಿ ತೋರೆ ಭಾರತಿ ‖ ಪಲ್ಲ ‖ ಅಜನ ಪಟ್ಟದ ರಾಣಿ । ಭುಜಗಸದೃಶ ವೇಣಿ । ಭಜಕರ ಚಿಂತಾಮಣಿ । ಕೀರವಾಣಿ ‖೧‖ ನಾದಸ್ವರೂಪಿಣಿ । ವೇದಾಂತ ರಂಗಿಣಿ । ಪ್ರಾದುರ್ಭವಳಾಗು ಸಾಧ್ವಿ ಕಲ್ಯಾಣಿ ‖ ೨ ‖ ಅಕ್ಷರ ಸಂಖ ಭಾಷೆ। ಆಶ್ರಿತಜನಪೋಷೆ। ಲಕ್ಷ್ಮೀನಾರಾಯಣನ ಸೊಸೆ। ಸುವಿಲಾಸೆ ‖೩‖

೭ ‖ ರಾಗ: ತೋಡಿ. ಆದಿತಾಳ ‖

ಹರಿ ನಿನಗ್ಯಾಕೋ ದಯಬಾರದು ‖ ಶ್ರೀಕರ ಲೋಕೇಶ। ಯೇಕಾನೇಕ ಸ್ವರೂಪ ‖ ಯಾಕೋ ‖ ಪಲ್ಲ ‖ ಕಾಮಿತಾರ್ಥದಾಯಕ । ಸ್ವಾಮಿ ಲೋಕ ನಾಯಕ । ಭೀಮ ವಿಕ್ರಮ–ಶ್ರೀ ರಾಮ–ನಿರಾಮಯ ‖ ಯಾಕೋ ‖ ೧ ‖ ಸುಂದರಿನಾಥ । ಸುರೇಂದ್ರವಂದಿತ । ನಂದನ ಕಂದಾರ–ವಿಂದದಳನಯನ ‖ ಹರಿ ‖ ೨ ‖ ಅಕ್ಷರಬ್ರಹ್ಮ। ಸಂ–ರಕ್ಷಿಸುವ ನಮ್ಮ ‖ ಪಕ್ಷೀಂದ್ರವಾಹನ। ಲಕ್ಷ್ಮೀನಾರಾಯಣ ‖ ಯಾಕೋ‖ ೩ ‖

೮ ‖ ರಾಗ: ಆನಂದ ಭೈರವಿ. ಅಷ್ಟತಾಳ ‖

ನಿರ್ಭಯನಾಗಲಿ ಯೋಗಿ । ಜಿತ ಭೋಗಿ ‖ ಉಭಯಸುಕೃತ ವಿರ । ಅಭ್ಯುದಯವಾಗಿ ‖ ಪಲ್ಲ ‖ ಸತ್ಯ ಜ್ಞಾನ ಸುವಿರಕ್ತಿ । ಹರಿಭಕ್ತಿ । ಚಿತ್ತ ದೊಳಿದ್ದರೆ ನಿತ್ಯಾಸಕ್ತಿ ‖ ೧ ‖ ಹೊದ್ದಿದನಿವನು । ಬ್ರಾಹ್ಮಣನು । ನಮ್ಮ ವನು ‖ ಇದ್ದರೆ ಪುಣ್ಯವು । ಶುದ್ಧಾಂತಃಕರಣನು ‖ ೨ ‖ ರಕ್ಷಿಸುವುದು ನಿನ್ನ ಭಾರ । ಸರ್ವಾಧಾರ ‖ ಲಕ್ಷ್ಮೀನಾರಾಯಣನೆ । ಲಕ್ಷ ನಮಸ್ಕಾರ ‖ ೩ ‖

೯ ‖ ರಾಗ: ಧನಾಶ್ರೀ. ಆದಿತಾಳ ‖

ಕರುಣಿಸಬಾರದೇ ಕಂಜನಾಭನೇ । ಕೈಯ ಮುಗಿವೆನಯ್ಯ ‖ ವರ ಫಣಿಗಿರಿ ಸು । ಸ್ಥಿರ ಮಂದಿರ ಶ್ರೀ । ಗುರು ಜನಾರ್ದನಾಮರ ಪಾಲಕ ‖ ಪಲ್ಲ ‖ ಅಪರಾಧಗಳಾಲೋಚಿಸುವರೆ ಸರಿ । ನೃಪರಾಜನಿಗಳವೇ ‖ ಕೃಪೆ ಯಿಂದಲಿ ಸಂರಕ್ಷಿಸದಿದ್ದರೀ । ಯಶಕೀರ್ತಿಯು ಶ್ರೀಹರಿ ನಿನಗಲ್ಲವೇ ‖೧‖

ಕನಕ ಪುರಂದರ ಮುಖ್ಯದಾಸರಂತೆ । ಗುಣವೆನಗಿನಿತಿಲ್ಲ ॥ ಜನರ ವಿಡಂಬಕೆ ದಾಸನಾದರೂ । ಘನಕೃಪಾರ್ಣವನೇ । ಕನಕಾಂಬರಧರ ॥ ೨ ॥ ಲಕ್ಷಮಾತ್ಯಾತಕೆ । ಲಕ್ಷ್ಮೀನಾರಾಯಣ ರಕ್ಷಾಮಣಿ ನೀನೆ ॥ ಪಕ್ಷೀಂದ್ರವಾಹನ ಪಾಪವಿಮೋಚನ । ತ್ರ್ಯಕ್ಷ ಮಿತ್ರನೆ । ನ್ನಕ್ಷಿಗೋಚರನಾಗಿ ॥ ೩ ॥

೧೦ ॥ ರಾಗ: ತೋಡಿ. ರೂಪಕತಾಳ ॥

ಪೂರ್ಣಬ್ರಹ್ಮ ಪುರುಷೋತ್ತಮ । ಪುಣ್ಯನಾಮ ಸೀತಾರಾಮ ॥ ಪಲ್ಲ ॥ ಮನ್ಮಥಶತ ಸುಂದರತಮ । ಸನ್ನುತಾತ್ಮ ಸಾರ್ವಭೌಮ ॥ ಅ. ಪ. ॥ ರಘುಕುಲಾಬ್ಧಿ ಪೂರ್ಣಚಂದ್ರಮ । ರಜನೀ ಚರಸಮರ ಭೀಮ ॥ ಅಗಣಿತ ಗಣ ಗುಣಧಾಮ । ಅಖಿಲ ಲೋಕ ಕ್ಷೇಮಧಾಮ ॥ ಇಂದ್ರನೀಲ ಘನಶ್ಯಾಮ । ಇಂದಿರಾ ಮನೋಭಿರಾಮ ॥ ವೃಂದಾರಕ ಮುನಿಲಲಾಮ । ವಂದನೀಯ ಭಕ್ತಪ್ರೇಮ ॥ ೨ ॥ ಅಕ್ಷರೇಡ್ಯ ಅಪ್ರಕಾಮ । ಸೂಕ್ಷ್ಮಸ್ಥೂಲ ತ್ರಾತನಿಯಮ ॥ ಲಕ್ಷ್ಮೀನಾರಾಯಣ ಸುಗಮ । ಲಕ್ಷ್ಮಣಾಗ್ರಜಯುತೇನಮ ॥ ೩ ॥

೧೧ ॥ ರಾಗ: ಆನಂದ ಭೈರವಿ. ಅಷ್ಟತಾಳ ॥

ಕಾಪಾಡಬೇಕು ಮಹಾಲಿಂಗ । ಸುರೋತ್ತುಂಗ । ಶ್ರೀಪತಿ ಚರಣಾರವಿಂದ ಸದ್ಭೃಂಗ ॥ ಪಲ್ಲ ॥ ತಾಪತ್ರಯಾಗ್ನಿಯೊಳ್ಬೆಂದೆ । ಬಲು ನೊಂದೆ । ಆಪತ್ತುಗಳ ಪರಿಹರಿಸೆನ್ನ ತಂದೆ ॥ ೧ ॥ ಅಜ್ಞಾನವನು ದೂರ ಮಾಡು । ದಯದಿ ನೋಡು । ಸುಜ್ಞಾನ ಹರಿಭಕ್ತಿ । ಶ್ರದ್ಧೆಯ ನೀಡು ॥ ೨ ॥ ಪಾವಂಜೆ ಕ್ಷೇತ್ರಾಭರಣ । ದೀನೋದ್ಧರಣ । ದೇವ ಲಕ್ಷ್ಮೀನಾರಾಯಣ ಪದ ಶರಣ ॥ ೩ ॥

೧೨ ॥ ರಾಗ: ಅಷ್ಟತಾಳ ॥

ಧಿಟ್ಟ ಮುಖ್ಯಪ್ರಾಣನೇ । ಜಗಜಟ್ಟಿ ಬಾ ಸುತ್ರಾಣನೇ । ಧಿಟ್ಟ ಮುಖ್ಯಪ್ರಾಣನೇ ॥ ಪಲ್ಲ ॥ ಶ್ರೇಷ್ಠ ಧನುಜಗರಟ್ಟೆ ಸುಗ. ವಿಶಿಷ್ಟ ಭಕ್ತ ಶಿಖಾಮಣೀ ॥ ಅ. ಪ. ॥ ವಾಯುಪುತ್ರ ವಿ । ಚಿತ್ರ ಬಲಿ ಸುರ । ರಾಯರಾಯರ ಗಂಡನೇ । ಪ್ರೀಯ ರಾಮ ಪದಾಬ್ಜ ಮಧುಕರ । ಮಾಯಿಕದನ ಪ್ರಚಂ

ಡನೇ ॥೧॥ ಜೀವರೋತ್ತಮ ಹನುಮ ಭೀಮ ಕೃ । ಪಾವಲಂಬ ಮಹೋಜನೇ ॥ ಪಾವಮಾನಿ ಪರೇಶ ಪದ್ಮಜ । ಭಾವಿ ಯತಿಕುಲ ರಾಜನೇ ॥ ೨ ॥ ಶೂರಾಗ್ರಣಿ ಸುಗುಣಿ ಲಕ್ಷುಮಿ । ನಾರಾಯಣದಾಸನೇ ॥ ಭಾರತೀ ಪದ ಸಾರವಿಂದಕೆ । ಸೂರನಿತ್ಯ ವಿಲಾಸನೇ ॥ ೩ ॥

೧೪ ॥ ರಾಗ: ಸೋಹನಿ. ಅಷ್ಟತಾಳ ॥

ಜಗವು ನಿನ್ನಾಧೀನ । ಖಗಪತಿವಾಹನ । ನಿಗಮಗೋಚರ ಕೃಷ್ಣ । ನಿತ್ಯತೃಪ್ತ ಮೋಹನ ॥ ಪಲ್ಲ ॥ ಇಂದ್ರಿಯ ಪ್ರೇರಕ । ಇಂದಿರೆ ನಾಯಕ । ಸಿಂಧುಶಯನ ಸದಾ । ನಂದ ಸುಖಪಾದ ॥ ೧ ॥ ಜೀವವಿಲಕ್ಷಣ । ಜೀವ ಸಂಪ್ರೇಕ್ಷಣ । ಕೇವಲ ನಿರ್ಗುಣ । ಕೇಶಿನಿಷೂದನ ॥ ೨ ॥ ವಾಯುಜನಕ ಯದು । ರಾಯ ರುಕ್ಮಿಣಿ ಸಖ । ಪ್ರಿಯ ಶ್ರೀಲಕ್ಷ್ಮಿನಾರಾಯಣ ಪಾವನ ॥ ೩ ॥

೧೪ ॥ ರಾಗ:........ ಆದಿತಾಳ ॥

ಮನ್ನಿಸೆನ್ನ ಮಹಾಲಿಂಗ ದೇವೋತ್ತುಂಗ । ಪುಣ್ಯಶ್ಲೋಕ ನಿನ್ನ । ವರ್ಣಿಪೆ ಮುಕ್ಕಣ್ಣ ॥ ಪಲ್ಲ ॥ ಭಕ್ತ ಪಾರಿಜಾತ । ಶಕ್ತಿದೇವಿ ಪ್ರೀತ । ಸತ್ಯಧರ್ಮಯೂಥ ಸ್ವಾಮಿ ಲೋಕನಾಥ ॥ ೧ ॥ ವಂದನೀಯ ಕೃಪಾ । ಸಿಂಧು ದಿವ್ಯರೂಪ । ಚಂದ್ರಚೂಡ ಸಾಂದ್ರ ! ನಂದ ವೈಷ್ಣವೇಂದ್ರ ॥ ೨ ॥ ಮಾರವೈರಿ ಲಕ್ಷ್ಮಿ । ನಾರಾಯಣ ಪ್ರೇಮಿ । ಸಾರಸ್ವತ ಬೋಧ । ಸಾಧು ಸುಪ್ರಸೀದ ॥ ೩ ॥

೧೫ ॥ ರಾಗ: ಮೋಹನ ಅಷ್ಟತಾಳ ॥

ಶ್ರೀಮದನಂತಸ್ವಾಮಿ । ರಕ್ಷಿಸು ಪುಣ್ಯನಾಮ ಸರ್ವಾಂತರ್ಯಾಮಿ । ಸೋಮಾರ್ಕ ಕಾಮ ಸು । ತ್ರಮ ಪ್ರಮುಖ ಸುರ । ಸ್ತೋಮವಂದಿತ ಭೀಮ ಬಲಿಗುಣ । ಧಾಮ ವರ ನಿಸ್ಸೀಮ ಮಹಿಮನೆ ॥ ೫ ॥ ಅಂತರ್ಬಹಿರ್ವ್ಯಾಪ್ತನೆ । ಸತತ ರಮಾ । ಕಾಂತನೆ ಪರಮಾಪ್ತನೆ । ಚಿಂತಿಪ ಭಕ್ತರ । ಚಿಂತಾಮಣಿ ನಿ । ಶ್ಚಿಂತ ನೊಂದೆ ಶಿರದಿ ಸಾಸಿವೆಯಂತೆ ಲೋಕವ ನಾಂತುಕೊಂಡಿಹೆ ॥ ೧ ॥ ರಾಮನ ಸೇವೆಗಾಗಿ । ಲಕ್ಷ್ಮಣನೆಂಬ ।

ಸಾವುವ ಶಾಳಿ ಯೋಗೀ । ಯಾಮಿನೀಚರರ । ನಿರ್ಮೂಲಿಸಿದ ವೀರಲ । ಲಾಮ ನಿರ್ಜಿತ ಕಾಮ ಸಜ್ಜನ । ಪ್ರೇಮ ಭಾವ ನಿರಾಮಯನೆ ಜಯ ॥ ೨ ॥ ಸಂಕರ್ಷಣ ಸುಗುಣಾಭರಣ ನಿ । ಶ್ಶಂಕವೈರಿ ಭೀಷಣ । ಶಂಕರಾದಿ ಸುರ ಸಂಕುಲನುತಪಾದ । ಪಂಕಜನೆ ಕಾಳಾಂಕ ಗೋ । ಪಾಲಂಕೃತಾಂಗ ಶು । ಭಂಕರನೆ ಜಯ ॥ ೩ ॥ ಸಾರತತ್ತ್ವಬೋಧನೆ । ಶರಣಜನವಾರಿಧಿ ಚಂದ್ರಮನೆ । ಘೋರ ಭವಾರ್ಣವ । ತಾರಕನಮಲ ಪಾ । ದಾರವಿಂದದ ಸೌಂದರ್ಯ ನಿಜ । ಭೂರಿ ನೇತ್ರಗಳಿಂದ ಕಾಣುವೆ॥೪॥ ಮಂಜುಳನಗರೇಶನೆ । ಭಕ್ತ ಭಯ । ಭಂಜನ ಸುವಿಲಾಸನೆ । ಕಂಜಕ್ಷ ಸಖ ಲಕ್ಷ್ಮೀನಾರಾಯಣ ಸಖತೇಜ । ಸ್ಪಂಜಭಗವದ್ಭಕ್ತ । ಜನಮನೋ ರಂಜನಾತ್ಮ ನಿರಂಜನನೆ ಜಯ ॥ ೫ ॥

೧೬ ॥ ರಾಗ: ಪಂತುವರಾಳಿ. ಆದಿತಾಳ ॥

ಬಂದನು । ಸರದಾರ ಸರದಾರ । ಅಂಧಕರಿಪು ಸುಕುಮಾರ । ಬಂದನು ಸರದಾರ ॥ ಪಲ್ಲ ॥ ಶರಣಾಗತಜನಸುರಮಂದಾರ । ದುರಿತಾರಣ್ಯಕುಠಾರ । ಸುರನರಾದಿ ತ್ರೈಲೋಕೋದ್ಧಾರ । ಗಿರಿಜಾಂಕಾಲಂಕಾರ ॥ ೧ ॥ ವಲ್ಲಿದೇವಿ ಮನೋಹಾರ । ಒಲ್ಲದ ಜನಕತಿ ದೂರ । ಬಲ್ಲವ ವೇದವೇದಾಂತ ಸಾರ । ಖುಲ್ಲ ಧನುಜ ಸಂಹಾರ ॥ ೨ ॥ ಸುಕ್ಷೇತ್ರ ಪಾವಂಜಾಖ್ಯಪುರವರ । ಸುಜ್ಞಾನನಿಧಿ ಗಭೀರ । ಲಕ್ಷ್ಮೀನಾರಾಯಣನ ಕಿಂಕರ । ರಕ್ಷಿಸು ನಮಿತ ಕುಬೇರ ॥ ೩ ॥

## (ಶ್ರೀ ಸುಬ್ರಹ್ಮಣ್ಯಪರ)

೧೭ ॥ ರಾಗ: ಯರಕಲ ಕಾಂಬೋದಿ ಆದಿತಾಳ ॥

ಓಂ ನಮೋ ನಮ್ಮ ಕುಲಸ್ವಾಮಿ । ಬಿನ್ನಪ ಲಾಲಿಸು ಪ್ರೇಮಿ । ಮನ್ನಿಸೆಮ್ಮ । ಭಕ್ತ ಸುಪ್ರ । ಸನ್ನ ಮೂರುತಿ ॥ ಓಂ ॥ ವಹ್ನಿಜಠರ ಸಂಸ್ಥಿತ । ಸ್ವರ್ಣಾದಿ ಗರ್ಭಸಂಭೃತ । ಪನ್ನಗಭೂಷಣನ ವೀಯೋ । ತ್ಪನ್ನ ಸಂಪನ್ನ ॥ ೧ ॥ ತಾರಕಾದಿ ದೈತ್ಯಾಂತಕ । ವೀರ ವೈಷ್ಣವರ ತಿಲಕ । ಸೇರಿದವರ । ಪೊರೆವ ಕರುಣಾ । ವಾರಿರಾಶಿಯೆ ॥ ೨ ॥ ಶಿವಕುಮಾರಾ । ಶ್ರಿತ ಮಂದಾರ । ದಿವಿ ಭುವಿಖ್ಯಾತ ಶೂರ । ನವವಿಧ । ಹಂಭಕ್ತಿಯಂ । ಕೇಳುವೆನು ನೀಡಯ್ಯ ॥ ೩ ॥ ಸ್ಥಾನಿಕಾಖ್ಯ ವಿಪ್ರರಿಂದ । ಅನವರತ

ಪೂಜೆಗೊಂಬೆ । ದೀನಜನ ವತ್ಸಲ ಭವಾನಿಪುತ್ರನೆ ॥ ೪॥ ಭೂವಲಯ ದಲ್ಲಿ ಮೆರೆವ । ಪಾವಂಜಾಖ್ಯ ಪುರನಿವಾಸಿ । ದೇವ ಲಕ್ಷ್ಮೀನಾರಾಯಣನ । ಸೇವಕೋತ್ತಮಾ ॥ ೫ ॥

೧೮ ॥ ರಾಗ: ಭೂಪಾಲಿ (ಉದಯರಾಗ) ಝಂಪೆ ತಾಳ ॥

ಏಳಯ್ಯ ಸುಬ್ರಹ್ಮಣ್ಯ । ಬೇಗಾಯಿತೇಳಯ್ಯ । ಸುಬ್ರಹ್ಮಣ್ಯ ॥ಪಲ್ಲ॥ ಕೋಳಿ ಕೂಗುವುದು ವನ । ಜಾಳಿ ಸೌಂಭ್ಯತಂ । ಗಾಳಿ ಬೀಸುವದು ಕರು । ಣಾಳು ತವ ಚರಣವ । ನ್ನೋಲಗಿಸಲು ದಯಗಿರಿ । ಮೇಲುಪ್ಪರಿಗೆ ಯೆದ್ದ । ಕೀಲಾಲಜಾಪ್ತನೀಗ । ಕಾಲಕಾಲದಿ ಭಕ್ತ । ಜಾಲವನು ಜಯ ಗೊಳಿಸೆ । ಪಾಲಿಸುವ ಪಾರ್ವತೀ । ಬಾಲಭಾಸ್ಕರ ತೇಜ । ಸಾಲಂಕೃತಾಂಗ ಗುಣ । ಶೀಲಸಿಧಿ ಸೇನಾನಿ । ಲೋಲಲೋಚನೆಯು ಸಹಿತ ॥ ೧ ॥ ಇಂದು ಸಂಕ್ರಮಣದಿನ । ಬಂದಿಹರು ಭಕ್ತಜನ । ವೃಂದ ಕಾಣಿಕೆ ಕಪ್ಪ । ತಂದು ನಿಂದಿಹರು ಬಲ । ಬಂದು ವಂದಿಸಿ ತಮಗೆ । ಬಂದ ಭಯ ಪರಿ ಹರಿಸಿ । ತಂದೆ ಸಲಹೆಂದು ಸ್ತುತಿಸೆ । ಕಂದರ್ಪ ಸಾಹಸ್ರ । ಸೌಂದರ್ಯ ಮೂರ್ತಿಯನು । ಚಂದದಿಂ ಕಾಣುವಾ । ನಂದ ಮಾನಸರು ಗೋ । ವಿಂದ ನಾಮಸ್ಮರಣೆ । ಯಿಂದ ಪಾವನಗೈವ । ಸ್ಕಂದ ಕರುಣಾಸಿಂಧುವೆ ॥ ೨ ॥ ಪೃಥ್ವಿಯೊಳಗುತ್ತಮ ಪ । ವಿತ್ರ ಪಾವಂಜಾಖ್ಯ । ಕ್ಷೇತ್ರದಿ ವಾಸಲೋ । ಕತ್ರಯ ವಿಭೂಷಣ ಪ । ರತ್ರೈಕ ಸಾಧನ ಮ । ಹತ್ತಪ ಮಹೇಶ್ವಾಸ । ಕಾರ್ತಿಕೇಯ ನಮೋಸ್ತುತೇ । ಭೃತ್ಯವತ್ಸಲ ಭವಲಯಾಬ್ಧಿ ಕುಂಭಜ ಭಜಕ । ಪ್ರೋತ್ಸಾಹ ಪಾವನ ಚ । ರಿತ್ರ ಸುತ್ರಾಮನುತ । ಕರ್ತಲಕ್ಷ್ಮೀ ನಾರಾಯಣ ಪರಾಯಣನೆ । ಮೃತ್ಯುಂಜಯನ ಪುತ್ರನೆ ॥ ೫ ॥

೧೯ ॥ ಮಂಗಲ ಪದ ॥

ಶ್ರೀ ಗೌರಿಸುಕುಮಾರನಿಗೆ । ಯೋಗಿವರೇಣ್ಯ ಶುಭಾಕರಗೆ । ರಾಗ ಲೋಭರಹಿತಗೆ ರಜತೇಶಗೆ । ಭಾಗೀರಥಿಸುತ ಭವ ಹರಗೇ ॥ ೧ ॥ ಪಾಶಾಂಕುಶ ವಿವಿಧಾಯುಧಗೆ । ಪಾಕಧರಾರ್ಚಿತ ಪಾವನಗೆ । ವಾಸರಮಣಿ ಶತ । ಭಾಸಗೆ ಈಶಗೆ । ಭಾಸುರ ಕನಕ ವಿ । ಭೂಷಣಗೆ ॥ ೨ ॥ ಶೀಲ ಸುಗುಣಗಣವಾರಿಧಿಗೆ । ನೀಲೇಂದೀವರಲೋಚನಗೆ । ಲೋಲ ಲಕ್ಷ್ಮಿ ನಾರಾಯಣ ರೂಪಗೆ । ಶಾಲಿತಾರೇಶ ಷಡಾನನಗೆ ॥ ೩ ॥

■■■■■■■■■

Edited, Printed & Published by K. V. Shenoy
at the Prabhat Printers, Ltd., Mangalore.